# ಯುವ ಕಲಿಕಾರ್ಥಿಗಳಿಗೆ ಪರಿಸರ ಶಿಕ್ಷಣ | ಉಡಾನ್ ಶಾಲೆಯ ಅನುಭವ

ವಂದನಾ ಮತ್ತು ಕಲ್ಪನಾ

## ಹಿನ್ನೆಲೆ

ನಮ್ಮ ಶಾಲೆ ಇರುವುದು ಹಿಮಾಚಲ ಪ್ರದೇಶದ ಪಾಲಂಪುರ ಬಳಿಯ ಗ್ರಾಮದಲ್ಲಿ. ನಮ್ಮ ಶಾಲೆಗೆ ಬರುವ ಬಹುತೇಕ ಮಕ್ಕಳು ದೈನಂದಿನ ಬದುಕಿನಲ್ಲಿ ಕೃಷಿಯೇ ಜೀವಾಳವಾಗಿರುವ ಕುಟುಂಬಗಳಿಂದ ಬರುವವರು. ನಮ್ಮಲ್ಲಿ ಸಾಕಷ್ಟು ಜನರಿಗೆ ಒಂದು ವರ್ಷವನ್ನು ಬಿತ್ತನೆ ಮತ್ತು ಕೊಯ್ಲು ವೃತ್ತಕ್ಕೆ ತಕ್ಕಂತೆ ಎರಡು ಋತುಗಳಾಗಿ ವಿಭಾಗಿಸಲಾಗುತ್ತದೆ; ನಾವೀಗ ಓದುತ್ತಿರುವ ಶಾಲೆಯ ಜಮೀನು ಹಿಂದೊಮ್ಮೆ ಅರಣ್ಯವಾಗಿತ್ತು. ಬಹಳ ಇತ್ತೀಚೆಗೆ ಅದು ಚಹಾ ತೋಟ ಮತ್ತು ಕೃಷಿಭೂಮಿ ಹಾಗೂ ದೇವದಾರು ನೆಡುತೋಪು ಗಡಿಯಾಗಿತ್ತು. ನಮ್ಮ ಅದೃಷ್ಟಕ್ಕೆ ವರ್ಷದ ಅಷ್ಟೂ ದಿನ ಹರಿಯುವ ತೊರೆಯೊಂದು ಶಾಲೆಯ ಸಮೀಪದಲ್ಲೇ ಹರಿಯುತ್ತಿದ್ದು, ಮುಂದೆ ಅದು ಪರ್ವತದ ತಪ್ಪಲಲ್ಲಿರುವ ಆವಾ ನದಿಯನ್ನು ಸೇರುತ್ತದೆ. ಇಂತಹ ಸನ್ನಿವೇಶದಲ್ಲಿ ಶಾಲೆಯ ನಮ್ಮ ಕಾರ್ಯಕ್ರಮಗಳಲ್ಲಿ ಪರಿಸರ ಮತ್ತು ಪರಿಸರ ವಿಜ್ಞಾನವು ಕೇಂದ್ರವಾಗಿರಬೇಕಿರುವುದು ನಮಗೆ ಸಹಜವಾಗಿಯೇ ಇದೆ.

## ನೈಸರ್ಗಿಕ ಪರಿಶೋಧನೆ

ಶಾಲೆಯ ಪುಟ್ಟ ಮಕ್ಕಳಿಂದ (ನರ್ಸರಿ ಸರಿಸುಮಾರು 3 ವರ್ಷ) ಆರಂಭಿಸಿ ದೊಡ್ಡ ಮಕ್ಕಳ (ಐದನೇ ತರಗತಿ ಮಕ್ಕಳು 10ರಿಂದ 11 ವರ್ಷ) ತನಕ ಎಲ್ಲರೂ ತರಕಾರಿ ತೋಟವನ್ನು ಅತ್ಯಂತ ಜೋಪಾನದಿಂದ ನೋಡಿಕೊಳ್ಳುತ್ತಾರೆ. ಗಿಡ ನೆಡುವುದು, ನಿರ್ವಹಣೆ ಮತ್ತು ಕೊಯ್ಲು ಕೆಲಸದಲ್ಲಿ ಮಕ್ಕಳು ಸಾಥ್ ನೀಡುತ್ತಾರೆ. ಕೆಲವೊಮ್ಮೆ ಶಾಲೆಯಲ್ಲಿ ಈ ತರಕಾರಿಯಿಂದ ಅಡುಗೆ ಮಾಡುವಾಗಲೂ ಸಹಾಯ ಮಾಡುತ್ತಾರೆ. ಮಕ್ಕಳು ಬೆಳೆ ಬೆಳೆಯುವುದನ್ನು ಅತ್ಯಂತ ಕುತೂಹಲದಿಂದ ಗಮನಿಸುತ್ತಾರೆ ಎಂಬುದನ್ನು ನಾವು ಕಂಡುಕೊಂಡಿದ್ದೇವೆ. ಮೊಳಕೆಯೊಡೆ-ಯುವುದರಿಂದ ಹಿಡಿದು, ಹೂವಾಗಿ ಹಣ್ಣು ಬಿಡುವುದು ಮತ್ತು ಅದಾದ ಬಳಿಕ ಬೀಜಗಳ ಉತ್ಪಾದನೆ – ಈ ಎಲ್ಲ ಪ್ರಕ್ರಿಯೆಗಳನ್ನು ಅವರು ತೀರಾ ಹತ್ತಿರದಿಂದ ನೋಡಿ ಕಲಿಯುತ್ತಾರೆ. ಯಾವುದೇ ಒಂದು ಪುಸ್ತಕದ ಮೂಲಕ ತಿಳಿಸುವುದಕ್ಕಿಂತಲೂ ಇದು ಉತ್ತಮ. ಮುಂದಿನ ವರ್ಷಗಳಲ್ಲಿ, ಅಂದರೆ ಮಕ್ಕಳು ನಾಲ್ಕು ಮತ್ತು ಐದನೇ ಕ್ಲಾಸಿಗೆ ಪ್ರವೇಶ ಪಡೆದ ಸಂದರ್ಭದಲ್ಲಿ ಅವರು ಇವಿಎಸ್ ಅನ್ನು ಒಂದು ವಿಷಯವಾಗಿ ಅಧ್ಯಯನ ಮಾಡುವಾಗ ಇವೆಲ್ಲವೂ ಅವರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದುಬಿಟ್ಟಿರುತ್ತದೆ. ಪಠ್ಯಪುಸ್ತಕದಲ್ಲಿರುವ ಅಮೂರ್ತ ವಿಚಾರಗಳು ಅವರಿಗೆ ಇನ್ನಷ್ಟು ಹತ್ತಿರವಾಗುತ್ತದೆ. ಇಲ್ಲಿ ಅನುಭವಿ ಮಾಲಿಗಳು ವರ್ಷದ ಅಷ್ಟೂ ದಿನ ಒಂದಲ್ಲ ಒಂದು ಬೆಳೆಗಳನ್ನು ಬೆಳೆಯುತ್ತಿದ್ದು, ತರಕಾರಿ, ಹಣ್ಣು, ಇತರ ಗಿಡಗಳು ಮತ್ತು ಹೂವುಗಳು ನಮಗೆ ಯಥೇಚ್ಛವಾಗಿ ಸಿಗುತ್ತಿರುತ್ತವೆ. ಇಂತಹ ವಿಶಾಲವಾದ ಕ್ಯಾಂಪಸ್ನಲ್ಲಿ ನಾವಿರುವುದು ನಿಜಕ್ಕೂ ಅದೃಷ್ಟವೇ ಸರಿ. ಈ ತೋಟದ ಸುತ್ತ ಮತ್ತು ದೇವದಾರು ನೆಡುತೋಪು ಹಾಗು ನೀರು ಹರಿಯುವ ಪ್ರದೇಶದಲ್ಲಿ ನಾವು ಹಲವು ಬಾರಿ ಸುತ್ತಾಡುತ್ತಿರುತ್ತೇವೆ. ಇಂತಹ ನಡಿಗೆಯ ಸಂದರ್ಭದಲ್ಲಿ ಮಾಲಿಗಳು ಮಾಡುವ ಕೆಲಸಗಳನ್ನು ಹತ್ತಿರದಿಂದ ಗಮನಿಸುತ್ತಾ ನೇರವಾಗಿ ಕಲಿಯುತ್ತೇವೆ. ಅವಲೋಕನದಿಂದಲೂ ನಾವು ಸಾಕಷ್ಟು ವಿಚಾರಗಳನ್ನು ತಿಳಿದುಕೊಳ್ಳುತ್ತೇವೆ. ಮಕ್ಕಳು ತೋಟದಲ್ಲಿ ಹಲವು ವಿಧದ ಹಕ್ಕಿಗಳನ್ನು ನೋಡಲು ಕಾತರದಿಂದ ಇರುತ್ತಾರೆ. ನೀರಿನ ಝರಿಯ ಬಳಿಯೂ ಅನೇಕ ಹಕ್ಕಿಗಳು ಬರುತ್ತವೆ. ತೊರೆಯ ಸುತ್ತಮುತ್ತ ಮತ್ತು ತೋಟದಲ್ಲಿ ಮರ–ಗಿಡಗಳು ಬೆಳೆದ ಹಾಗೆ ದೇವದಾರು ನೆಡುತೋಪಿನಲ್ಲಿ ಗಿಡಗಳು ಬೆಳೆಯುವುದಿಲ್ಲ ಎಂಬುದನ್ನು ಮಕ್ಕಳು ಗಮನಿಸಿದ್ದಾರೆ. ಇಂತಹ ವಿಷಯಗಳನ್ನು ಆರಂಭಿಕ ಅಂಶವನ್ನಾಗಿ ಬಳಸಿಕೊಂಡು ನಾವು ಜೀವವೈವಿಧ್ಯತೆ, ಹವಾಮಾನ ಬದಲಾವಣೆ, ಆಕ್ರಮಣಶೀಲ ತಳಿಗಳು (invasive Species) ಇನ್ನೂ ಅನೇಕ ಸಂಗತಿಗಳ ಬಗ್ಗೆ ಮುಖ್ಯವಾದ ಮತ್ತು ಸೂಕ್ಷ್ಮ ಚರ್ಚೆಯನ್ನು ನಡೆಸಲು ಸಾಧ್ಯವಾಗುತ್ತದೆ. ನಡಿಗೆಯ ಪೂರ್ವಸಿದ್ಧತೆ, ತಯಾರಿಯಿಂದ ಆರಂಭಿಸಿ ಪರಿಶೋಧನೆಯ ಅಂತ್ಯದವರೆಗೆ ಒಟ್ಟು ಈ ಪ್ರಕ್ರಿಯೆಯಲ್ಲಿ ಶಿಕ್ಷಕರಾದ ನಾವೂ ಕೂಡ ಕಲಿಯುತ್ತಾ ಹೋಗುತ್ತೇವೆ. ನಡಿಗೆಯ ಬಳಿಕ ಮಕ್ಕಳು ಸಾಕಷ್ಟು ಪ್ರಶ್ನೆಗಳನ್ನು ಕೇಳುವುದರಿಂದ ಮತ್ತು ಅವರ ಬಹುತೇಕ ಪ್ರಶ್ನೆಗಳಿಗೆ ನಮ್ಮಲ್ಲಿ ಸಿದ್ಧ ಉತ್ತರಗಳಿಲ್ಲದೇ ಇರುವುದರಿಂದ ನಾವು ಹೆಚ್ಚಾಗಿ ತಿಳಿದುಕೊಳ್ಳಲೇಬೇಕಾಗುತ್ತದೆ.

ಕ್ಯಾಂಪಸ್ ನಡಿಗೆಯ ಜೊತೆಜೊತೆಗೇ ನಾವು ಹೊಸ ವಿಚಾರಗಳನ್ನು ತಿಳಿದುಕೊಳ್ಳುವ, ಅನುಭವವನ್ನು ಪಡೆದುಕೊಳ್ಳುವ ಪ್ರಯತ್ನಗಳನ್ನು ಕೂಡ ಮಾಡುತ್ತಿರುತ್ತೇವೆ. ಗಂಟೆ ಹೂವುಗಳು (tulip flowers) ಅಪೂರ್ವವಾಗಿ ಬೆಳೆದ ಸಂದರ್ಭದಲ್ಲಿ ಹತ್ತಿರದ ಸರ್ಕಾರಿ ನರ್ಸರಿಗೆ ಭೇಟಿ ಕೊಡುತ್ತೇವೆ ಅಥವಾ ವಿಜ್ಞಾನ ಕೇಂದ್ರಕ್ಕೆ ತೆರಳಿ ದೇಶದ ನಾನಾ ಭಾಗಗಳಿಂದ ಬಂದಿರುವ ಚಿಟ್ಟೆಗಳು ಮತ್ತು ಕೀಟಗಳನ್ನು ನೋಡುತ್ತೇವೆ ಅಥವಾ ರೇಷ್ಮೆ ಕೃಷಿಯ ಬಗ್ಗೆ ತಿಳಿದುಕೊಳ್ಳುತ್ತೇವೆ. ಇದರಿಂದ ವಿದ್ಯಾರ್ಥಿಗಳಿಗೆ ತಮ್ಮ ಅನುಭವವನ್ನು ಮೀರಿದ ಹೊಸ ಪ್ರಪಂಚವನ್ನು ಅನಾವರಣ ಮಾಡಿಸಿದಂತಾಗುತ್ತದೆ.




ಚಿತ್ರ-1: ಮಕ್ಕಳು ಶಾಲಾ ತೋಟದಲ್ಲಿಯೇ ತರಕಾರಿಗಳನ್ನು ಬೆಳೆದು ಕೊಯ್ಲು ಮಾಡುತ್ತಿದ್ದರು.

## ತರ್ಕಬದ್ಧ ಚಿಂತನೆ ಮತ್ತು ಪ್ರಶ್ನೆಗಳಿಗೆ ಅವಕಾಶ

ಹಸು, ಕರು ಹಾಕುವುದನ್ನು ನೋಡುವುದಕ್ಕಾಗಿ ನಾವು ವಿದ್ಯಾರ್ಥಿಗಳನ್ನು ಹತ್ತಿರದ ಹೈನುಗಾರಿಕೆ ಕೇಂದ್ರಕ್ಕೂ ಕರೆದೊಯ್ಯುತ್ತೇವೆ. ಕೆಲವರಿಗೆ ಅದು ಸಾಮಾನ್ಯ ದೃಶ್ಯವಾದರೂ, ಉಳಿದವರಿಗೆ ಅದು ಹೊಸ ಹಾಗೂ ವಿಶೇಷವಾದ ಅನುಭವ. ಈ ಅನುಭವಗಳು ಎಲ್ಲ ವಯೋಮಾನದ ಮಕ್ಕಳ ನಡುವೆ ಅರ್ಥಪೂರ್ಣ ಚರ್ಚೆಗೆ ದಾರಿಮಾಡಿಕೊಡುತ್ತದೆ. ದನದ ಕರು ಕುಡಿಯುವ ಹಾಲನ್ನೇ ನಾವೂ ಸಹ ಕುಡಿಯುತ್ತೇವೆ ಅಲ್ಲವೇ? ಎಂದು ಕೆಲವು ಮಕ್ಕಳು ಅಚ್ಚರಿ ವ್ಯಕ್ತಪಡಿಸುತ್ತಾರೆ. ಇನ್ನು ಕೆಲವು ಹೆಚ್ಚು ವಯಸ್ಸಿನ ಮಕ್ಕಳು ಮನುಷ್ಯರ ಮಿಲನ ಮತ್ತು ಜನನದ ಬಗ್ಗೆ ಗಟ್ಟಿಯಾಗಿಯೇ ಪ್ರಶ್ನೆ ಮಾಡುತ್ತಾರೆ. ಇಂತಹ ಅನುಭವಗಳಿಂದ ಎಲ್ಲ ವಯಸ್ಸಿನ ಮಕ್ಕಳು ತಾರ್ಕಿಕವಾಗಿ ಯೋಚಿಸುವಂತೆ ಹಾಗೂ ಪ್ರಶ್ನೆಗಳನ್ನು ಕೇಳುವಂತೆ ಮಾಡಲು ಸಾಧ್ಯವಾಗುತ್ತದೆ. ಜೊತೆಗೆ ನಾವೂ ಗಂಭೀರವಾಗಿ ತೊಡಗಿಕೊಳ್ಳಲು ಅವಕಾಶವಾಗುತ್ತದೆ.

## ಕಿರಿಯ ಕಲಿಕಾರ್ಥಿಗಳಿಗಾಗಿ ಹೊಂದಿಕೊಳ್ಳುವುದು

ಮಕ್ಕಳು ವಯಸ್ಸಿನಲ್ಲಿ ಚಿಕ್ಕವರಿದ್ದಷ್ಟೂ ಅವರು ಕಲಿಕೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಾರೆ ಎಂಬುದನ್ನು ನಾವು ಗಮನಿಸಿದ್ದೇವೆ. ಕೆಲವು ವಿಷಯಗಳು ಚಿಕ್ಕಮಕ್ಕಳಿಗೆ 'ತೀರಾ ಸಂಕೀರ್ಣ', ಅವರಿಗೆ ಅರ್ಥ ಮಾಡಿಕೊಳ್ಳಲು ಕಷ್ಟವಾಗುತ್ತದೆ ಎಂದು ನಾವು ಭಾವಿಸಿ, ಅವರನ್ನು ಕೆಲವು ಸಂವಾದದ ಸಂದರ್ಭದಲ್ಲಿ ತೊಡಗಿಸಿಕೊಳ್ಳುವುದಿಲ್ಲ. ಇದರಿಂದ ಕಲಿಕೆಯಿಂದ ಅವರನ್ನು ದೂರ ಇಟ್ಟಂತಾಗುತ್ತದೆ. ಆದರೆ ಮಕ್ಕಳು ನಿಜಕ್ಕೂ ಇದಕ್ಕೆ ಸಿದ್ಧರಿರುತ್ತಾರೆ. ಶಿಕ್ಷಕರಾದ ನಾವು ಸರಿಯಾದ ರೀತಿಯಲ್ಲಿ ಅವರ ಜೊತೆ ಮಾತುಕತೆ ನಡೆಸಬೇಕು. ಕಿರಿಯ ಮಕ್ಕಳಿಗೆ ಪ್ರಾಯೋಗಿಕವಾದ, ಸ್ವಂತ ಅನುಭವಗಳು ಬೇಕಾಗುತ್ತವೆ. ಕರಿಹಲಗೆಯ ಮೇಲೆ ಹೂವಿನದೊಂದು ರೇಖಾಚಿತ್ರವನ್ನು ಬರೆದು ಇದು ಹೂವಿನ ದಳಗಳು, ಪುಷ್ಪಪಾತ್ರಗಳು ಎಂದೆಲ್ಲ ಅದರ ಭಾಗಗಳನ್ನು ವಿವರಿಸಲು ಪ್ರಯತ್ನಿಸಿದರೆ ಮಕ್ಕಳಿಗೆ ಅದನ್ನು ನೆನಪಿಟ್ಟುಕೊಳ್ಳಲು ತೀರಾ ಕ್ಲಿಷ್ಟವೆನ್ನಿಸಬಹುದು. ಆದರೆ ಅದಕ್ಕೆ ಬದಲಾಗಿ ನಾನಾ ರೀತಿಯ ಹೂವುಗಳನ್ನು ತೋರಿಸಿ ಅವುಗಳಲ್ಲಿ ಸಮಾನ ಅಂಶಗಳಿರುವವು ಎಷ್ಟು ಎಂದು ಮತ್ತು ಅವುಗಳ ವಿವಿಧ ಭಾಗಗಳನ್ನು ಎಚ್ಚರಿಕೆಯಿಂದ ಗಮನಿಸುವಂತೆ ಹೇಳಿ ಹೆಸರಿಸುತ್ತಾ ಹೋದರೆ ಅದು ಮಕ್ಕಳಲ್ಲಿ ವರ್ಷ ಕಳೆದರೂ ನೆನಪಿಟ್ಟುಕೊಳ್ಳುವಂತಾಗುತ್ತದೆ. ಮಕ್ಕಳಿಗೆ ಇದು ಹೆಚ್ಚು ಅರ್ಥಪೂರ್ಣವೂ ಹೌದು.

ನಮ್ಮ ಶಾಲೆಯಲ್ಲಿ ಒಂದು 'ನಿಸರ್ಗ ಟೇಬಲ್' (Nature Table) ಇದೆ. ಅಲ್ಲಿಗೆ ಯಾವುದೇ ಮಗು ಅಥವಾ ಶಿಕ್ಷಕರು ತಮ್ಮ ಮನೆ ಸುತ್ತಮುತ್ತಲಿನ ಅಥವಾ ತಾವು ಭೇಟಿ ನೀಡಿದ ಪ್ರದೇಶದಿಂದ ಹಂಚಿಕೊಳ್ಳಲು ಆಸಕ್ತಿದಾಯಕವಾದ ವಸ್ತುಗಳನ್ನು ತರಬಹುದು. ಇಡೀ ಶಾಲೆಯ ವಿದ್ಯಾರ್ಥಿಗಳು ಈ ಮೇಜನ್ನು ಬಂದು ವೀಕ್ಷಿಸಬಹುದು. ಕೆಲವೊಮ್ಮೆ ಮಕ್ಕಳನ್ನು ಗುಂಪು–ಗಳಾಗಿಯೂ ಕರೆದುಕೊಂಡು ಬರಬಹುದು. 'ನೀವು ಹೂವುಗಳನ್ನು ಕೀಳಬಾರದು ಎಂದು ನಮಗೆ ಹೇಳಿದಿರಿ. ಆದರೆ ನೀವೇ ಈ ಹೂವುಗಳನ್ನು ಕಿತ್ತು ತಂದಿದ್ದೀರಿ!" ಎಂದು ಅಲ್ಲಿ ಕೆಲವು ಮಕ್ಕಳು ನಮಗೆ ಸವಾಲು ಹಾಕುತ್ತಾರೆ. ಬೋಧನೆ ಮತ್ತು ಕಲಿಕಾ ಪ್ರಕ್ರಿಯೆಯಲ್ಲಿ ಇಂತಹ ತಾರ್ಕಿಕವಾದ ಪ್ರಶ್ನೆ ಮಾಡುವ ಪ್ರವೃತ್ತಿ ಅತ್ಯಂತ ಮುಖ್ಯ.

## ಜ್ಞಾನದ ಕ್ರೋಢೀಕರಣ

ಇಂತಹ ಜ್ಞಾನವನ್ನು ಇನ್ನಷ್ಟು ಗಟ್ಟಿಗೊಳಿಸಬೇಕಾದ ಅಗತ್ಯವಿದೆ ಮತ್ತು ಈ ವಿಷಯದಲ್ಲಿ ನಾವು ಹೆಚ್ಚು ಗಮನಹರಿಸಬೇಕಾಗಿದೆ. ಶಾಲೆ, ತರಗತಿಗಳು ಬೆಳೆದಂತೆ ನಮಗೆ ಈ ರೀತಿಯ ವಿಭಿನ್ನ ಜ್ಞಾನದ ಅಗತ್ಯವಿದ್ದು, ಇದರಿಂದ ಕಲಿಕೆ ಪ್ರತ್ಯೇಕಗೊಳ್ಳುವುದಿಲ್ಲ ಅಥವಾ ಸ್ಥಗಿತಗೊಳ್ಳುವುದಿಲ್ಲ. ಐದನೇ ವರ್ಷದಲ್ಲಿ ಅವರು ಕಲಿತದ್ದು ಹನ್ನೆರಡನೇ ವಯಸ್ಸಿನವರೆಗೂ ಪ್ರಸ್ತುತವಾಗುತ್ತದೆ. ಅದಕ್ಕಾಗಿ ನಾವು ಎಲ್ಲ ವಯೋಮಾನದವರಿಗೆ ಸ್ಥಿರವಾದ

ಯೋಜನೆಯನ್ನು ರೂಪಿಸಬೇಕಾಗುತ್ತದೆ. ಜ್ಞಾನವನ್ನು ವೃದ್ಧಿಸುವಂತಹ ಚರ್ಚೆ ನಡೆಸಬೇಕಾಗುತ್ತದೆ. ಮಕ್ಕಳು ಬೆಳೆಯುತ್ತ ಹೋದ ಹಾಗೆ ಇಂತಹ ಅನುಭವಗಳನ್ನು ಪಠ್ಯ ರೂಪದಲ್ಲಿ ಪರಿವರ್ತಿಸಬೇಕಿದ್ದು, ಕೆಲವೊಮ್ಮೆ ಶಾಲಾ ವ್ಯವಸ್ಥೆ ಬಯಸುವಂಥಹ ಸಂಕೀರ್ಣ ಅಭಿವ್ಯಕ್ತಿಯೂ ಬೇಕಾಗುತ್ತದೆ. ನಮ್ಮ ಹೆಚ್ಚಿನ ಮಕ್ಕಳು ಸರ್ಕಾರಿ ಅಥವಾ ಖಾಸಗಿ ಮುಖ್ಯವಾಹಿನಿಯ ಶಾಲೆಗಳಿಗೆ ಸೇರ್ಪಡೆಯಾಗುವ ಮತ್ತು ಕಾಲೇಜು ಮೆಟ್ಟಿಲೇರುವ ಆಶಯವನ್ನೂ ಹೊಂದಿರುತ್ತಾರೆ. ಆಗ ಅವರು ಈ ಅನುಭವವನ್ನು ಇನ್ನಷ್ಟು ಮುಂದಕ್ಕೆ ಕರೆದೊಯ್ಯಬಹುದು. ಈ ಪ್ರಕ್ರಿಯೆಗಳಿಗಾಗಿ, ಪರೀಕ್ಷೆಗಳಲ್ಲಿ ನಿರೀಕ್ಷಿಸುವ ಪ್ರತಿಕ್ರಿಯೆಗಳನ್ನು ನೀಡುವುದಕ್ಕೆ ಕಲಿಕೆ ಮುಖ್ಯವಾಗಿದ್ದು, ಅದೃಷ್ಟವಶಾತ್, ನಾವು, ಅನುಭವದಿಂದ, ಸಂವಾದವನ್ನು ಬಳಸಿಕೊಂಡು ಪಠ್ಯಪುಸ್ತಕಗಳಲ್ಲಿ ತಜ್ಞತೆ ಮತ್ತು ಉತ್ತಮ ಅರ್ಥೈಸುವಿಕೆಯೊಂದಿಗೆ ಇದನ್ನು ಆರಂಭಿಸಲು ಶಕ್ತರಾಗುವ ಸ್ಥಿತಿಯಲ್ಲಿದ್ದೇವೆ.

ನಮ್ಮ ದಿನನಿತ್ಯದ ಕಾರ್ಯದಲ್ಲಿ ಈ ಅನುಭವಗಳು ಮತ್ತು ಪ್ರಯೋಗಗಳು ಒಂದಕ್ಕೊಂದು ತಳುಕು ಹಾಕಿ–ಕೊಂಡಿರುವುದರಿಂದ ಈ ಸಮಗ್ರವಾದ ಚರ್ಚೆಗಳು ಅವರಿಗೆ ಅತ್ಯಂತ ಅರ್ಹವಾದ ಅನುಭವಗಳನ್ನು ಒದಗಿಸುತ್ತವೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಇದಕ್ಕಾಗಿ ನಾವು ಅನೇಕ ಕಾರ್ಯತಂತ್ರಗಳ ಪ್ರಯತ್ನವನ್ನು ಮಾಡುತ್ತೇವೆ. ಒಂದು ನಿರ್ದಿಷ್ಟವಾದ ಮರ ನಾನಾ ಋತುಗಳಲ್ಲಿ ಇರುವ ಸ್ಥಿತಿಯ ಬಗ್ಗೆ ನಮ್ಮ ಅಭಿಪ್ರಾಯವನ್ನು ತಿಳಿಸುವುದು, ತರಗತಿ ಕೊಠಡಿಯಲ್ಲಿ ಚರ್ಚೆಗಳನ್ನು ನಡೆಸುವುದು ಮತ್ತು ಒಂದು ಅನುಭವದ ಬಳಿಕ ನಮ್ಮ ಯೋಚನೆಗಳನ್ನು ಬರೆದಿಡುವುದು ಇತ್ಯಾದಿ ಕಾರ್ಯತಂತ್ರಗಳು ಸೇರಿವೆ. ಕೆಲವೊಮ್ಮೆ ಮಕ್ಕಳು ಅನ್ಯಮನಸ್ಕರಾದ ಕ್ಷಣವನ್ನು (distractions) ಕೂಡ ಕಲಿಕಾ ಕ್ಷಣವಾಗಿ ಬದಲಿಸಲು ನಾವು ಪ್ರಯತ್ನ ಮಾಡುತ್ತೇವೆ. ಅದು ಎಷ್ಟೋ ಬಾರಿ ಆಸಕ್ತಿಪೂರ್ಣವೂ ಆಗಿರುತ್ತದೆ; ಉದಾಹರಣೆಗೆ, ಹಿಂದೆಂದೂ ಕಾಣದೇ ಇದ್ದ ಜೀರುಂಡೆಯೊಂದು ಕೊಠಡಿಯೊಳಗೆ ಬರುವುದು ಮತ್ತು ಕೊಠಡಿಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದು ಅಥವಾ ವಿದ್ಯಾರ್ಥಿನಿ–ಯೊಬ್ಬಳು ಅನ್ಯಮನಸ್ಕಳಾಗಿ (ಅಥವಾ ನಮಗೆ ಹಾಗೆ ಕಾಣಿಸಿರಬಹುದು) ಕಿಟಕಿಯಿಂದ ಹೊರಗೆ ದಿಟ್ಟಿಸುವುದು, ಮತ್ತು ಮರದ ಮೇಲೆ ಹಿಂದೆಂದೂ ಕಂಡಿರದ ಹಕ್ಕಿಯೊಂದು ಕುಳಿತಿರುವುದನ್ನು ನೋಡಿ ಗಟ್ಟಿಯಾಗಿ ಕೂಗಿ ಹೇಳುವುದು ಇತ್ಯಾದಿ. ಮಕ್ಕಳ ಈ ರೀತಿಯ ಗಮನಿಸುವ ಶಕ್ತಿಯನ್ನು ನಾವು ಯಾವತ್ತೂ ಸಂಭ್ರಮಿಸುತ್ತೇವೆ. ಮಗು ಒಂದು ಪ್ರಶ್ನೆಯನ್ನು ಕೇಳಿದಾಗ ಹೇಗೆ ಸಂಭ್ರಮಿಸುತ್ತೇವೋ ಹಾಗೆ. ಇದರ ಜೊತೆಗೆ ಇಂತಹ ಪ್ರಶ್ನೆಗಳಿಗೆ ತಾವಾಗಿಯೇ, ತಮ್ಮ ಸುತ್ತ ಇರುವ ಸಂಪನ್ಮೂಲಗಳ ಮೂಲಕ ಉತ್ತರಗಳನ್ನು ಕಂಡುಕೊಳ್ಳಲು ಮಕ್ಕಳಿಗೆ ಉತ್ತೇಜನ ನೀಡುತ್ತೇವೆ; ಗ್ರಂಥಾಲಯದಲ್ಲಿ ಹುಡುಕಾಟ ನಡೆಸುವುದು, ಮನೆಯಲ್ಲಿ ದೊಡ್ಡವರನ್ನು ಕೇಳುವುದು ಹಾಗೂ ಮೊಬೈಲ್ ಮತ್ತು ಇತರ ತಂತ್ರಜ್ಞಾನಗಳನ್ನು ಬಳಸಿ ಉತ್ತರವನ್ನು ಹುಡುಕುವುದು. ಕೆಲವೊಮ್ಮೆ ಮಕ್ಕಳು ತಮ್ಮ ಈ ಕಲಿಕೆಯನ್ನು ಶುಕ್ರವಾರ ನಡೆಸುವ 'ವಿಷಯ ಹಂಚಿಕೆಯ ಅಸೆಂಬ್ಲಿ'ಯಲ್ಲಿ (Friday sharing assemblies) ಹಂಚಿಕೊಳ್ಳುತ್ತಾರೆ. ಇಂತಹ ನೆನಪುಗಳು ವಿದ್ಯಾರ್ಥಿಗಳಲ್ಲಿ, ಶಿಕ್ಷಕರಲ್ಲಿ ಮತ್ತು ಇತರ ಕಲಿಕಾರ್ಥಿಗಳಲ್ಲಿ ಶಾಶ್ವತವಾಗಿ ಉಳಿಯುತ್ತವೆ. ಹಾಡುವುದು, ಜೇಡಿ ಮಣ್ಣಿನಲ್ಲಿ ಆಕೃತಿಗಳನ್ನು ಮಾಡುವುದು ಹಾಗೂ ಇತರ ಕಲೆ ಮತ್ತು ಕರಕುಶಲಕಲೆಗಳಂತಹ ಚಟುವಟಿಕೆಗಳಲ್ಲಿ ತೊಡಗಿಕೊಂಡಾಗ ನಾವು ಸ್ಥಳೀಯ ಪರಿಸರದೊಂದಿಗೆ ನಮ್ಮ ಅನುಭವಗಳನ್ನು ತಳುಕು ಹಾಕುತ್ತೇವೆ. ಆದರೆ ಈ ಕ್ಷೇತ್ರದಲ್ಲಿ ನಾವು ಇನ್ನೂ ಏನಾದರೂ ಮಾಡಬಹುದು ಎಂಬ ಅಭಿಪ್ರಾಯವನ್ನೇ ಹೊಂದಿರುತ್ತೇವೆ. ಎಲ್ಲ ವಯೋಮಾನದ ಗುಂಪುಗಳ ಜೊತೆಗೆ ಇನ್ನಷ್ಟು ಉತ್ತಮ ಯೋಜಿತ ಚಟುವಟಿಕೆಗಳನ್ನು ನಡೆಸಿದರೆ ಕಲಿಕೆಯ ದೃಷ್ಟಿಯಿಂದ ಅದು ಎಲ್ಲರಿಗೆ ಮತ್ತಷ್ಟು ಅರ್ಥಪೂರ್ಣವಾಗಿರುತ್ತದೆ.

## ನಮ್ಮ ಕಲಿಕೆಗಳು

ಇಂತಹ ಕೆಲವು ಚಟುವಟಿಕೆಗಳು ಮತ್ತು ಅನುಭವಗಳನ್ನು ಅಗತ್ಯಕ್ಕಿಂತ ಹೆಚ್ಚು ಸರಳೀಕರಿಸಲಾಗಿದೆ ಎಂದು ನನಗನಿಸುತ್ತದೆ ಅಥವಾ ಇಂಥವನ್ನೆಲ್ಲ 'ಕಲಿಕೆ' ಎಂದು ಪರಿಗಣಿಸಲು ಸಾಧ್ಯವೇ ಎಂದು ಜನರು ಪ್ರಶ್ನಿಸಿದ ಹಾಗೆನಿಸುತ್ತದೆ. ಆದರೆ, ಕಳೆದ ಅನೇಕ ವರ್ಷಗಳ ಅನುಭವದಿಂದ ನಾವು ಕಂಡುಕೊಂಡಿರುವ ಅಂಶವೇನೆಂದರೆ, ಇಂತಹ ಸಣ್ಣಸಣ್ಣ ಅನುಭವಗಳು ಜಗತ್ತು ನಿಜಕ್ಕೂ ಹೇಗೆ ನಡೆಯುತ್ತಿದೆ ಎಂಬ ನಿಟ್ಟಿನಲ್ಲಿ ವಿದ್ಯಾರ್ಥಿಗಳಿಗೆ ಅತ್ಯಮೂಲ್ಯವಾದ ರೀತಿಯಲ್ಲಿ ಸಹಾಯವಾಗುತ್ತ ಹೋಗುತ್ತದೆ. ಕೆಲವು ವಿಷಯಗಳು ಎಷ್ಟು ಮೌಲ್ಯಯುತವಾದವು ಮತ್ತು ಇಂತಹ ಸಂಗತಿಗಳು ಮತ್ತು ನಮಗಿಂತ ಹೊರತಾದ ಜೀವಿಗಳ ವಿಚಾರದಲ್ಲಿ ಸಂವೇದನಾಶೀಲತೆಯನ್ನು ಬೆಳೆಸಿಕೊಳ್ಳುವುದು ಹೇಗೆ ಎಂಬುದನ್ನು ಅರಿತುಕೊಳ್ಳಲು ಪ್ರಕೃತಿಗಿಂತ ಉತ್ತಮ ಶಿಕ್ಷಕ ಬೇರೆ ಇಲ್ಲ. ಭವಿಷ್ಯದಲ್ಲಿ ವಿದ್ಯಾರ್ಥಿಗಳು ಬೆಳವಣಿಗೆಯನ್ನು ಕಂಡಾಗ ಮತ್ತು ಹವಾಮಾನ ಬದಲಾವಣೆ ಬಗ್ಗೆ, ಜಗತ್ತು ಮತ್ತು ಅದರಲ್ಲಿನ ಜೀವಿಗಳ ಬದಲಾವಣೆಗಳ ಬಗ್ಗೆ ಹೆಚ್ಚು ಶೈಕ್ಷಣಿಕವಾಗಿ ಅಥವಾ ಗಂಭೀರವಾಗಿ ಚರ್ಚೆ ಮಾಡಬೇಕಾದಾಗ ತಮ್ಮ ಅಗತ್ಯಗಳೇನು ಮತ್ತು ಯಾವುದು ಶೋಷಣೆಗೊಳಗಾಗುವುದಲ್ಲ ಎಂಬುದನ್ನು ಅರ್ಥ ಮಾಡಿಕೊಳ್ಳುವ ಸಂದರ್ಭ ಬಂದಾಗ ಇಂತಹ ಅನುಭವಗಳು ಅವರಿಗೆ ಅಡಿಪಾಯವನ್ನು ಒದಗಿಸುತ್ತವೆ.

ಈ ಹಿಂದೆ ನಾವು ಪ್ರಸ್ತಾಪ ಮಾಡಿದಂತೆ ಇದು ಕೇವಲ ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಾಗಿಲ್ಲ. ಶಿಕ್ಷಕರಾಗಿ ದಿನವೂ ಕಲಿಯುವ ನಾವು ವಿದ್ಯಾರ್ಥಿಗಳಿಂದಲೂ, ಅವರು ಕೇಳುವ ಪ್ರಶ್ನೆಗಳಿಂದಲೂ, ಅವರು ತಮ್ಮ ಜೀವನದಲ್ಲಿ ಕಂಡಿದ್ದನ್ನು ನಮ್ಮೊಂದಿಗೆ ಹಂಚಿಕೊಂಡ ರೀತಿಯಿಂದಲೂ ಕಲಿಯುತ್ತ ಹೋಗುತ್ತೇವೆ. ನಾವು ಹಿಂದೆಂದೂ ಪರಿಗಣಿಸದೇ ಇದ್ದ, ಅರಿತುಕೊಳ್ಳದೇ ಇದ್ದ ಅನೇಕ ಸಂಗತಿಗಳನ್ನು ಅವರು ನಮ್ಮ

ಗಮನಕ್ಕೆ ತಂದ ಪ್ರಸಂಗಗಳಿವೆ; ಒಂದು ರೀತಿಯ ಅಣಬೆ ಕೇವಲ ಒಂದೇ ರೀತಿಯ ಮರವನ್ನು ಮಾತ್ರ ಆಶ್ರಯಿಸುತ್ತದೆ ಅಥವಾ ಕೆಲವು ಕೀಟಗಳು ವರ್ತಿಸುವ ರೀತಿ ಇತ್ಯಾದಿ. ಒಬ್ಬರು ಪಾಲಕರು ಒಮ್ಮೆ "ಬಿದಿರಿನ" ಬಗ್ಗೆ ಒಂದು ಕಲಾಪವನ್ನು ಏರ್ಪಡಿಸಿದ್ದರು. ಅದರ ಜೀವನಚಕ್ರ, ಅದರ ಅನೇಕ ರೀತಿಯ ಬಳಕೆಗಳು ಮತ್ತು ಅನೇಕ ವಿಧಗಳಲ್ಲಿ ಅದಕ್ಕಿರುವ ಸಾಂಸ್ಕೃತಿಕ ಮೌಲ್ಯವನ್ನು ಅವರು ವಿವರಿಸಿದ್ದರು. ಇದೇ ಸಂದರ್ಭದಲ್ಲಿ ಬಿದಿರಿನ ಚಿಗುರನ್ನು ಬಳಸಿ ಎಲ್ಲರೂ ಸೇರಿ ತಯಾರಿಸಿದ ಖಾದ್ಯವನ್ನು ತಿನ್ನುವುದರೊಂದಿಗೆ ಅಂದಿನ ಕಲಾಪ ಕೊನೆಗೊಂಡಿತ್ತು. ಆದರೆ ಇದೇ ಹೊತ್ತಿಗೆ ಒಬ್ಬ ವಿದ್ಯಾರ್ಥಿ ಒಂದು ಪ್ರಶ್ನೆಯನ್ನು ಎತ್ತಿದ; ಈ ಎಳೆ ಬಿದಿರನ್ನು ಈ ರೀತಿ ತಿನ್ನುವುದರ ಹಿಂದಿನ ನೈತಿಕತೆಯಾದರೂ ಎಂಥದ್ದು? ಇಂತಹುದೊಂದು ಪ್ರಶ್ನೆ ನಮಗೆ ಯಾವತ್ತೂ ಎದುರಾಗಿರಲಿಲ್ಲ. ಮಕ್ಕಳು ಹೀಗೆ ಮರೆಯಲ್ಲಿರುವ ಅನೇಕ ಸಂಗತಿಗಳನ್ನು ಬೊಟ್ಟು ಮಾಡುವುದರ ಮೂಲಕ ಒಂದು ಸಣ್ಣ ಪೊದೆ ಕೂಡ ಹೇಗೆ ಪರಿಸರ ವ್ಯವಸ್ಥೆಗೆ ಜೀವ ತುಂಬಬಲ್ಲದು ಎಂಬುದನ್ನು ನಾವು ಅರ್ಥಮಾಡಿಕೊಳ್ಳುವಂತೆ ಮಾಡುತ್ತಾರೆ.

ನಿಮ್ಮ ಮನೆಯಲ್ಲಿ ಎಷ್ಟು ಜನ ಇದ್ದೀರಿ? ಕುಟುಂಬದಲ್ಲಿ ಇರುವ ಸದಸ್ಯರೆಷ್ಟು ಎಂದು ಮಕ್ಕಳನ್ನು ನಾವು ಕೇಳಿದಾಗ ಬಹುತೇಕರು ತಮ್ಮ ಮನೆಯಲ್ಲಿ ಇರುವ ಪ್ರಾಣಿಗಳ ಪಟ್ಟಿಯನ್ನೂ ಕೊಟ್ಟುಬಿಡುತ್ತಿದ್ದರು. ಅಂದರೆ ಅವರ ಮನೆಯಲ್ಲಿರುವ ನಾಯಿಗಳು, ಹಸು, ಕುರಿಗಳ ವಿವರಗಳನ್ನೂ ನೀಡುತ್ತಿದ್ದರು. ಕುಟುಂಬ ಮತ್ತು ಸಾಕುಪ್ರಾಣಿಗಳ ನಡುವೆ ವ್ಯತ್ಯಾಸ ಮಾಡುವ ನಮಗೆ ಅವರ ಇಂತಹ ಯೋಚನೆಗಳು ಎಷ್ಟು ಸೂಕ್ಷ್ಮ ಅನಿಸುತ್ತವೆ. ಶಾಲಾ ಆವರಣದಲ್ಲಿ ಹಾವು ಕಾಣಿಸಿಕೊಂಡರೆ ವಿದ್ಯಾರ್ಥಿಗಳಿಗೆ ಭಯವಾಗುತ್ತಿರಲಿಲ್ಲ, ಬದಲಾಗಿ ಕುತೂಹಲ ಉಂಟಾಗುತ್ತಿತ್ತು. ಇದು ಅವರಿಗೆ ಹಾವುಗಳ ಬಗ್ಗೆ ಇರುವ ಕಳಕಳಿಯನ್ನು ತೋರಿಸುತ್ತದೆ. ಹಾವಿನ ಬಗ್ಗೆ ಇರುವ ಭಯ ಹಾಗೂ ಸಂಭಾವ್ಯ ಅಪಾಯದ ಬಗ್ಗೆಯೇ ನಾವು ಯಾವತ್ತೂ ಯೋಚಿಸುತ್ತಿರುತ್ತೇವೆ. ಮಕ್ಕಳು ತಮ್ಮಲ್ಲಿರುವ ಕುತೂಹಲವನ್ನು ಯಾವತ್ತೂ ಕಳೆದುಕೊಳ್ಳಬಾರದು ಅಥವಾ ಭಯವನ್ನು ಬೆಳೆಸಿಕೊಳ್ಳಬಾರದು. ಇದಕ್ಕೆ ಬೇಕಾದ ಮಾರ್ಗದರ್ಶನಗಳನ್ನು ಮಾಡುವುದು ಶಿಕ್ಷಕರಾದ ನಮ್ಮ ಕರ್ತವ್ಯ.




**ಚಿತ್ರ-2: ಮಣ್ಣಿನ ನಾನಾ ವಿಧಗಳ ಬಗ್ಗೆ ತಿಳಿದುಕೊಳ್ಳುವ ಸಂದರ್ಭದಲ್ಲಿ ಮಣ್ಣಿನ ದಂಡೆ ಮಾಡುತ್ತಿರುವ ವಿದ್ಯಾರ್ಥಿ.**



ಚಿತ್ರ-3:  ಹಿಮಾಚಲ ಪ್ರದೇಶದ ಕಾಂಗ್ರಾ ಜಿಲ್ಲೆಯ ಪಾಲಂಪುರದ ಕಂದಬಾರಿ ಗ್ರಾಮದಲ್ಲಿರುವ ಉಡಾನ್ ಶಾಲೆ.


**ಕೃತಜ್ಞತೆ:**

ಈ ಲೇಖಕರು ಅನು, ಡೊರೊತಿ, ನಿಶಾ, ನಿಶಿ, ರಿಂಪಿ, ಸರೋಜ್, ಧ್ರುವಾ ಮತ್ತು ರಾಗಿಣಿ ಅವರು ನೀಡಿದ ಮಾಹಿತಿಗಳಿಗೆ ಆಭಾರ ಮನ್ನಣೆಯನ್ನು ಸಲ್ಲಿಸಲು ಬಯಸುತ್ತಾರೆ.


---




**ವಂದನಾ** ಅವರು ಶಿಕ್ಷಕಿಯಾಗಿದ್ದು, ಉಡಾನ್ ಶಾಲೆಯಲ್ಲಿ ಅನೇಕ ರೂಪಗಳಲ್ಲಿ ಮಕ್ಕಳೊಂದಿಗೆ ಕೆಲಸ ಮಾಡಿದ್ದಾರೆ; ಅದು ಕಲಿಕಾ ಕೇಂದ್ರದಲ್ಲಿರಬಹುದು ಅಥವಾ ಪ್ರಾಥಮಿಕ ಶಾಲೆಯಲ್ಲಾಗಿರಬಹುದು. ಚಿತ್ರಕಲಾವಿದರು ಹಾಗೂ ಹಾಡುಗಾರರೂ ಆಗಿರುವ ವಂದನಾ ಅವರು ಮಕ್ಕಳ ಕಲಿಕೆಗೆ ನೆರವಾಗುವಂತಹ ಹೊಸ ಮಾರ್ಗಗಳ ಬಗೆಗೆ ಸದಾ ಆಸಕ್ತಿಯನ್ನು ತೋರಿಸುತ್ತ ಬಂದವರು. ಅವರನ್ನು udaanschoolkandbari@gmail.com ಮೂಲಕ ಸಂಪರ್ಕಿಸಬಹುದು.





**ಕಲ್ಪನಾ** ಅವರು ಉಡಾನ್ ಶಾಲೆಯ ಮೊದಲ ಪಾಲಕರು ಮತ್ತು ಮೊದಲ ಶಿಕ್ಷಕಿಯೂ ಹೌದು. ಅವರು ಶಾಲೆಯ ಎಲ್ಲ ವಯೋಮಾನದ ಮಕ್ಕಳ ಜೊತೆ ಕೆಲಸ ಮಾಡುತ್ತ ಬಂದವರು. ಮಕ್ಕಳಿಗೆ ಕಲಿಸುವುದರ ಜೊತೆಗೆ ಅಷ್ಟೇ ಅವರಿಂದಲೂ ಕಲಿಯುವ ಕೆಲಸವನ್ನೂ ಸಹ ಅವರು ಮಾಡುತ್ತಾರೆ. ಅವರನ್ನು udaanschoolkandbari@gmail.com ಮೂಲಕ ಸಂಪರ್ಕಿಸಬಹುದು.



ಅನುವಾದ: **ಮಂಜುನಾಥ್ ಚಾಂದ್** | ಪರಿಶೀಲನೆ: **ಲತಾ ಕೆ.ಸಿ.**